RNI No. **KARBIL/2001/47147**

# ಕರ್ನಾಟಕ ರಾಜ್ಯಪತ್ರ

**ಅಧಿಕೃತವಾಗಿ ಪ್ರಕಟಿಸಲಾದುದು**



| ಸಂಪುಟ ೧೪೮<br>Volume 148 | ಬೆಂಗಳೂರು, ಗುರುವಾರ, ಜನವರಿ ೩೧, ೨೦೧೩ (ಮಾಘ ೧೧, ಶಕ ವರ್ಷ ೧೯೩೪)<br>Bangalore, Thursday, January 31, 2013 (Magha 11, Shaka Varsha 1934) | ಸಂಚಿಕೆ ೫<br>Issue 5 |
|---|---|---|



## ಭಾಗ – ೪ಎ

## ರಾಜ್ಯದ ವಿಧೇಯಕಗಳ ಮತ್ತು ಅವುಗಳ ಮೇಲೆ ಪರಿಶೀಲನಾ ಸಮಿತಿಯ ವರದಿಗಳು, ರಾಜ್ಯದ ಅಧಿನಿಯಮಗಳು ಮತ್ತು ಅಧ್ಯಾದೇಶಗಳು, ಕೇಂದ್ರದ ಮತ್ತು ರಾಜ್ಯದ ಶಾಸನಗಳ ಮೇರೆಗೆ ರಾಜ್ಯ ಸರ್ಕಾರವು ಹೊರಡಿಸಿದ ಸಾಮಾನ್ಯ ಶಾಸನಬದ್ಧ ನಿಯಮಗಳು ಮತ್ತು ರಾಜ್ಯಾಂಗದ ಮೇರೆಗೆ ರಾಜ್ಯಪಾಲರು ಮಾಡಿದ ನಿಯಮಗಳು, ಹಾಗೂ ಕರ್ನಾಟಕ ಉಚ್ಚ ನ್ಯಾಯಾಲಯವು ಮಾಡಿದ ನಿಯಮಗಳು

**ನಗರಾಭಿವೃದ್ಧಿ ಸಚಿವಾಲಯ**

**ಅಧಿಸೂಚನೆ**

**ಸಂಖ್ಯೆ: ನಅಇ 178 ಬೆಂರೂಪ್ರಾ 2012, ಬೆಂಗಳೂರು, ದಿನಾಂಕ : 26–9–2012.**

ಕರ್ನಾಟಕ ನಗರ ಮತ್ತು ಗ್ರಾಮಾಂತರ ಯೋಜನಾ ಕಾಯ್ದೆ 1961ರ ಪ್ರಕರಣ 4(ಎ) ರಡಿಯಲ್ಲಿ ಪ್ರದತ್ತವಾದ ಅಧಿಕಾರವನ್ನು ಚಲಾಯಿಸುತ್ತಾ ಕರ್ನಾಟಕ ಸರ್ಕಾರವು ತುಮಕೂರು ಜಿಲ್ಲೆ ಪಾವಗಡ ಪುರಸಭೆ ಎಲ್ಲೆಯ ಕ್ಷೇತ್ರವನ್ನೇ "ಪಾವಗಡ ಸ್ಥಳೀಯ ಯೋಜನಾ ಪ್ರದೇಶ" ವೆಂದು ದಿನಾಂಕ: 26–9–2012 ರಿಂದ ಜಾರಿಗೆ ಬರುವಂತೆ ಈ ಮೂಲಕ ಘೋಷಿಸಿದೆ ಹಾಗೂ ಸದರಿ ಕಾಯ್ದೆಯ ಕಲಂ 2(7)(ಬಿ) ರನ್ವಯ ಸದರಿ ಪುರಸಭೆಯೇ ಸ್ಥಳೀಯ ಯೋಜನಾ ಪ್ರದೇಶದ ವ್ಯಾಪ್ತಿಯಲ್ಲಿ ಯೋಜನಾ ಪ್ರಾಧಿಕಾರವಾಗಿ ಕೆಲಸ ಕಾರ್ಯಗಳನ್ನು ನಿರ್ವಹಿಸತಕ್ಕದೆಂದು ಆದೇಶಿಸುತ್ತಾ, ಸದರಿ ಸ್ಥಳೀಯ ಯೋಜನಾ ಪ್ರದೇಶಕ್ಕೆ ಸಿದ್ಧಪಡಿಸುವ ಮಹಾಯೋಜನೆ ಸರ್ಕಾರದಿಂದ ಅನುಮೋದನೆಯಾಗಿ ವಲಯ ನಿಯಮಾವಳಿಗಳು ಜಾರಿಗೆ ಬರುವವರೆಗೆ ಅಭಿವೃದ್ಧಿಗಳನ್ನು ನಿಯಂತ್ರಿಸಲು ಸಮೀಪದ ಮಧುಗಿರಿ ಪಟ್ಟಣದ ಪುರಸಭೆ ಯೋಜನಾ ಪ್ರಾಧಿಕಾರದ ಚಾಲ್ತಿ ವಲಯ ನಿಯಮಗಳನ್ನು ಅನುಸರಿಸಲು ಅನುಮತಿಸಲಾಗಿದೆ.

ಅನುಬಂಧ–1 ರಲ್ಲಿ ಪಾವಗಡ ಪುರಸಭೆ ಸ್ಥಳೀಯ ಯೋಜನಾ ಪ್ರದೇಶದ ವ್ಯಾಪ್ತಿಯಲ್ಲಿ ಬರುವ ಗ್ರಾಮಗಳ ವಿವರಗಳನ್ನು ಹಾಗೂ ಅನುಬಂಧ–2 ರಲ್ಲಿ ಸ್ಥಳೀಯ ಯೋಜನಾ ಪ್ರದೇಶದ ಎಲ್ಲೆಯ ವಿವರಗಳನ್ನು ನೀಡಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ

**ಟಿ.ಎಂ. ವಾಸುದೇವ ರಾವ್**

ಸರ್ಕಾರದ ಅಧೀನ ಕಾರ್ಯದರ್ಶಿ,

ನಗರಾಭಿವೃದ್ಧಿ ಇಲಾಖೆ.

**ಅನುಬಂಧ–1**

ಸ್ಥಳೀಯ ಯೋಜನಾ ಪ್ರದೇಶದ ವ್ಯಾಪ್ತಿಯಲ್ಲಿ ಬರುವ ಪಟ್ಟಣ ಹಾಗೂ ಗ್ರಾಮಗಳ ವಿವರ

| ಕ್ರಮ ಸಂಖ್ಯೆ | ಪಟ್ಟಣ–ಗ್ರಾಮದ ಹೆಸರು | ಷರಾ |
|---|---|---|
| 1. | ಪಾವಗಡ | (ಭಾಗಶಃ) 1–16, 61–89, 119–124, 139–166, 180–182, 217, 218, 328, 329, 340–380, 383, 386–389, 396, 450, 455, 467, 502. |

**ಅನುಬಂಧ–2**

**ಪಾವಗಡ ಸ್ಥಳೀಯ ಯೋಜನಾ ಪ್ರದೇಶದ ಎಲ್ಲೆಯ ವಿವರ**

ಪಾವಗಡ ಪುರಸಭೆ ಯೋಜನಾ ಪ್ರದೇಶದ ಎಲ್ಲೆಯು ಪಾವಗಡ ಗ್ರಾಮದ ಸ.ನಂ. 180 ರ ಉತ್ತರ ಗಡಿಯಿಂದ ಪ್ರಾರಂಭವಾಗಿ ಸ.ನಂ. 180, 181, 182 ನ್ನು ಒಳಗೊಂಡು ಸದರಿ ಸ.ನಂಬರ್‌ಗಳ ಪೂರ್ವದ ಗಡಿಯಲ್ಲಿ ದಕ್ಷಿಣಕ್ಕೆ ಚಲಿಸಿ ಮಜರೆ ರೊಪ್ಪ ಗ್ರಾಮ ಹೊರತುಪಡಿಸಿ ಮುಂದುವರೆದು 162ರ ಪೂರ್ವಗಡಿಯಲ್ಲಿ ಮುಂದುವರೆದು ಸ.ನಂ. 217ರ ಉತ್ತರ ಗಡಿಯಲ್ಲಿ ಚಲಿಸಿ ಸ.ನಂ. 217ನ್ನು ಒಳಗೊಂಡು ಪೆನುಗೊಂಡ ರಸ್ತೆ ತಲುಪಿ ರಸ್ತೆಯ ಅಂಚಿನಲ್ಲಿ ಪೂರ್ವಾಭಿಮುಖವಾಗಿ ಚಲಿಸಿ ದಕ್ಷಿಣಕ್ಕೆ ತಿರುಗಿ ಸ.ನಂ. 218ರ ಪೂರ್ವ ಗಡಿಯಲ್ಲಿ ಮುಂದುವರೆದು ಪಶ್ಚಿಮಕ್ಕೆ ತಿರುಗಿ ಸ.ನಂ. 218 ರ ದಕ್ಷಿಣ ಅಂಚಿನಲ್ಲಿ ಚಲಿಸಿ ಸ.ನಂ. 159 ನ್ನು ತಲುಪಿ ಸ.ನಂ. 159ರ ಪೂರ್ವದ ಗಡಿಯಲ್ಲಿ ದಕ್ಷಿಣಾಭಿಮುಖವಾಗಿ ಚಲಿಸುತ್ತಾ ಸ.ನಂ. 158, 364, 363ರ ಪೂರ್ವಗಡಿಯಲ್ಲಿ ಮುಂದುವರೆದು ಸ.ನಂ. 363ರ ದಕ್ಷಿಣ ಅಂಚನ್ನು ತಲುಪಿ ಪಶ್ಚಿಮಕ್ಕೆ ತಿರುಗಿ ಸ.ನಂ. 343ನ್ನು ತಲುಪಿ ದಕ್ಷಿಣಕ್ಕೆ ತಿರುಗಿ ಸ.ನಂ. 343, 342, 340, 341ರ ಪೂರ್ವಗಡಿಯಲ್ಲಿ ಮುಂದುವರೆದು ಸ.ನಂ. 341ರ ದಕ್ಷಿಣದ ಅಂಚನ್ನು ತಲುಪಿ ಪಶ್ಚಿಮಕ್ಕೆ ತಿರುಗಿ ಸ.ನಂ. 341, 329 ನ್ನು ಒಳಗೊಂಡು ಹಿಂದೂಪುರ ರಸ್ತೆಯನ್ನು ತಲುಪಿ ಸ.ನಂ. 329ರ ದಕ್ಷಿಣ ಅಂಚಿನಲ್ಲಿ ಪ್ರಾರಂಭವಾಗಿ ಹಿಂದೂಪುರ ರಸ್ತೆಯನ್ನು ದಾಟಿ ಸ.ನಂ. 396, 328, 16ರ ದಕ್ಷಿಣ ಅಂಚಿನಲ್ಲಿ ಹರಿದು ತುಮಕೂರು ರಸ್ತೆ ತಲುಪಿ ರಸ್ತೆ ಅಂಚಿನಲ್ಲಿ ಮುಂದುವರೆದು ತುಮಕೂರು ರಸ್ತೆಯನ್ನು ದಾಟಿ ಪಶ್ಚಿಮಾಭಿಮುಖವಾಗಿ ಸ.ನಂ. 16ರ ದಕ್ಷಿಣ ಅಂಚಿನಲ್ಲಿ ಹರಿದು ಉತ್ತರಕ್ಕೆ ತಿರುಗಿ ಸ.ನಂ. 16ರ ಪಶ್ಚಿಮಗಡಿಯಲ್ಲಿ ಮುಂದುವರೆದು ಸ.ನಂ. 6ನ್ನು ತಲುಪಿ ಪಶ್ಚಿಮದಲ್ಲಿ ಸ.ನಂ. 6ರ ದಕ್ಷಿಣ ಅಂಚಿನಿಂದ ಪ್ರಾರಂಭವಾಗಿ ಸ.ನಂ. 6, 7 ರ ಪಶ್ಚಿಮಗಡಿಯಲ್ಲಿ ಉತ್ತರಾಭಿಮುಖವಾಗಿ ಚಲಿಸುತ್ತಾ, ಸ.ನಂ. 5ರ ದಕ್ಷಿಣ ಅಂಚನ್ನು ತಲುಪಿ ಪಶ್ಚಿಮಕ್ಕೆ ತಿರುಗಿ ಸ.ನಂ. 5ನ್ನು ಒಳಗೊಂಡು ಸ.ನಂ. 61ರ ದಕ್ಷಿಣ ಅಂಚನ್ನು ತಲುಪಿ ಪಶ್ಚಿಮಕ್ಕೆ ತಿರುಗಿ ಸ.ನಂ. 61ರ ಪಶ್ಚಿಮ ಅಂಚನ್ನು ತಲುಪಿ ಉತ್ತರಕ್ಕೆ ತಿರುಗಿ ಸ.ನಂ. 61ರ ಪಶ್ಚಿಮಗಡಿಯಲ್ಲಿ ಚಲಿಸಿ ರಸ್ತೆಯನ್ನು ದಾಟಿ ಸ.ನಂ. 89ನ್ನು ತಲುಪಿ ಸ.ನಂ. 89, 88ರ ಪಶ್ಚಿಮ ಅಂಚಿನಲ್ಲಿ ಉತ್ತರಾಭಿಮುಖವಾಗಿ ಚಲಿಸಿ ಪೂರ್ವಕ್ಕೆ ತಿರುಗಿ ಸ.ನಂ. 88, 87ರ ಉತ್ತರ ಅಂಚಿನಲ್ಲಿ ಮುಂದುವರೆದು ಸದರಿ ಸ.ನಂಬರ್‌ಗಳನ್ನು ಒಳಗೊಂಡು ಸ.ನಂ. 86ರ ಪಶ್ಚಿಮ ಮೂಲೆಯಲ್ಲಿ ಸ.ನಂ. 144ರ ಪಶ್ಚಿಮಗಡಿಯಲ್ಲಿ ಉತ್ತರಾಭಿಮುಖವಾಗಿ ಮುಂದುವರೆದು ಸ.ನಂ. 144ನ್ನು ಒಳಗೊಂಡು ಸ.ನಂ. 120ರ ದಕ್ಷಿಣ ಮೂಲೆಯನ್ನು ತಲುಪಿ ಉತ್ತರಾಭಿಮುಖವಾಗಿ ಸ.ನಂ. 120, 119 ರ ಪಶ್ಚಿಮ ಗಡಿಯಲ್ಲಿ ಚಲಿಸಿ ಚಳ್ಳಕೆರೆ ರಸ್ತೆಯನ್ನು ತಲುಪಿ ಉತ್ತರದಲ್ಲಿ ಚಳ್ಳಕೆರೆ ರಸ್ತೆಯಿಂದ ಪ್ರಾರಂಭವಾಗಿ ಪೂರ್ವಾಭಿಮುಖವಾಗಿ ಸ.ನಂ. 119, 124, 123, 141, 139 ರ ಉತ್ತರ ಗಡಿಯಲ್ಲಿ ಮುಂದುವರೆದು ಚಳ್ಳಕೆರೆ ರಸ್ತೆಯ ಅಂಚಿನಲ್ಲಿ ಚಲಿಸುತ್ತಾ ಬಳ್ಳಾರಿ ರಸ್ತೆಯನ್ನು ದಾಟಿ. ಸ.ನಂ. 166ನ್ನು ತಲುಪಿ ಉತ್ತರಕ್ಕೆ ತಿರುಗಿ ಸ.ನಂ. 166ನ್ನು ಒಳಗೊಂಡು ಸ.ನಂ. 180 ದಕ್ಷಿಣ ಮೂಲೆಯನ್ನು ತಲುಪಿ ಉತ್ತರಕ್ಕೆ ತಿರುಗಿ ಸ.ನಂ. 180ರ ಪಶ್ಚಿಮ ಗಡಿಯಲ್ಲಿ ಚಲಿಸಿ ಸ.ನಂ. 180ರ ಉತ್ತರ ಗಡಿಯನ್ನು ತಲುಪುತ್ತದೆ.

(ನಅಇ 178 ಬೆಂರೂಪ್ರಾ 2012)

**ಟಿ.ಎಂ. ವಾಸುದೇವ ರಾವ್**
ಸರ್ಕಾರದ ಅಧೀನ ಕಾರ್ಯದರ್ಶಿ,
ನಗರಾಭಿವೃದ್ಧಿ ಇಲಾಖೆ.

**P.R. 724**

## ಆರ್ಥಿಕ ಸಚಿವಾಲಯ

**ಅಧಿಸೂಚನೆ**

**ಸಂಖ್ಯೆ: ಆಇ 911 ವೆಚ್ಚ–12/12, ಬೆಂಗಳೂರು, ದಿನಾಂಕ : 2–11–2012.**

ಕರ್ನಾಟಕ ನಾಟಕ ಅಕಾಡೆಮಿಯ ವಾರ್ಷಿಕ ಪ್ರಶಸ್ತಿ ಪ್ರದಾನ ಸಮಾರಂಭದ ಸ್ಮರಣಿಕೆ ಹಾಗೂ ವೇದಿಕೆ ನಿರ್ಮಾಣವನ್ನು ರೂ. 5.50 ಲಕ್ಷಗಳ ವೆಚ್ಚದಲ್ಲಿ ಕೈಗೊಳ್ಳಲು ಕರ್ನಾಟಕ ಸಾರ್ವಜನಿಕ ಸಂಗ್ರಹಣೆಗಳಲ್ಲಿ ಪಾರದರ್ಶಕತೆ ಅಧಿನಿಯಮ–1999ರ ಕಲಂ 4(ಜಿ) ರಡಿ ಪ್ರದತ್ತವಾದ ಅಧಿಕಾರ ಚಲಾಯಿಸಿ ಕನ್ನಡ ಮತ್ತು ಸಂಸ್ಕೃತಿ, ವಾರ್ತಾ ಇಲಾಖೆಗೆ ಪಾರದರ್ಶಕತೆ ಕಾಯ್ದೆಯಿಂದ ವಿನಾಯಿತಿ ನೀಡಿದೆ.

ಉತ್ತಮ ಗುಣಮಟ್ಟದ ಉತ್ಪನ್ನ/ಸೇವೆಯನ್ನು ಸಮಂಜಸ ದರದಲ್ಲಿ ಸಂಗ್ರಹಿಸುವುದನ್ನು ಕನ್ನಡ ಮತ್ತು ಸಂಸ್ಕೃತಿ, ವಾರ್ತಾ ಇಲಾಖೆಯು ದೃಢಪಡಿಸಿಕೊಳ್ಳುವುದು.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ
**ಕಾಂತ. ಎಸ್.**
ಸರ್ಕಾರದ ಅಧೀನ ಕಾರ್ಯದರ್ಶಿ,
ಆರ್ಥಿಕ ಇಲಾಖೆ (ಸಂಗ್ರಹಣಾ ಕೋಶ).

**P.R. 4**

## ಆರ್ಥಿಕ ಸಚಿವಾಲಯ

**ತಿದ್ದುಪಡಿ**

**ಸಂಖ್ಯೆ: ಆಇ 883 ವೆಚ್ಚ–12/12, ಬೆಂಗಳೂರು, ದಿನಾಂಕ : 19–10–2012.**

ಅಧಿಸೂಚನೆ ಸಂ. ಆಇ 26 ವೆಚ್ಚ–12/2012, ದಿನಾಂಕ : 30–1–2012ರ ಎರಡನೇ ಸಾಲಿನಲ್ಲಿ ನಮೂದಿಸಿರುವ "ರೂ. 4,56,296 ವೆಚ್ಚದಲ್ಲಿ" ಎಂಬುದರ ಬದಲಾಗಿ "ಪ್ರತಿ ವಾಹನಕ್ಕೆ ರೂ. 8,58,469/–ಗಳಂತೆ ಎರಡು ವಾಹನಗಳನ್ನು ರೂ. 17,16,937/–ಗಳ ವೆಚ್ಚದಲ್ಲಿ" ಎಂದು ತಿದ್ದುಪಡಿ ಮಾಡಿ ಓದಿಕೊಳ್ಳತಕ್ಕದ್ದು.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ
**ಕಾಂತ. ಎಸ್.**
ಸರ್ಕಾರದ ಅಧೀನ ಕಾರ್ಯದರ್ಶಿ,
ಆರ್ಥಿಕ ಇಲಾಖೆ (ಸಂಗ್ರಹಣಾ ಕೋಶ).

**P.R. 5**

## ಆರ್ಥಿಕ ಸಚಿವಾಲಯ

### ಅಧಿಸೂಚನೆ

**ಸಂಖ್ಯೆ: ಆಇ 909 ವೆಚ್ಚ–12/12, ಬೆಂಗಳೂರು, ದಿನಾಂಕ : 19–10–2012.**

ಮೆ: HESCOM ಸಂಸ್ಥೆಯು ಮೆ : **NGEF** (ಹುಬ್ಬಳ್ಳಿ) ಸಂಸ್ಥೆಯಿಂದ ಒಟ್ಟು 18,000 Transformers ಗಳ ದುರಸ್ತಿ ಮತ್ತು ಸೇವಾ ಕಾರ್ಯಗಳನ್ನು ರೂ. 528.81 ಲಕ್ಷಗಳ ವೆಚ್ಚದಲ್ಲಿ ಒಂದು ವರ್ಷದ ಅವಧಿಗೆ ಮಾತ್ರ ನಿರ್ವಹಿಸಲು ಕರ್ನಾಟಕ ಸಾರ್ವಜನಿಕ ಸಂಗ್ರಹಣೆಗಳಲ್ಲಿ ಪಾರದರ್ಶಕತೆ ಅಧಿನಿಯಮ–1999ರ ಕಲಂ 4(ಜಿ) ರಡಿ ಪ್ರದತ್ತವಾದ ಅಧಿಕಾರ ಚಲಾಯಿಸಿ ಇಂಧನ ಇಲಾಖೆಗೆ ಪಾರದರ್ಶಕತೆ ಕಾಯ್ದೆಯಿಂದ ವಿನಾಯಿತಿ ನೀಡಿದೆ.

ಉತ್ತಮ ಗುಣಮಟ್ಟದ ಸೇವೆಯನ್ನು ಸಮಂಜಸ ದರದಲ್ಲಿ ಸಂಗ್ರಹಿಸುವುದನ್ನು ಇಂಧನ ಇಲಾಖೆಯು ದೃಢಪಡಿಸಿಕೊಳ್ಳುವುದು.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ
**ಕಾಂತ. ಎಸ್.**
ಸರ್ಕಾರದ ಅಧೀನ ಕಾರ್ಯದರ್ಶಿ,
ಆರ್ಥಿಕ ಇಲಾಖೆ (ಸಂಗ್ರಹಣಾ ಕೋಶ).

**P.R. 6**

## ಆರ್ಥಿಕ ಸಚಿವಾಲಯ

### ಅಧಿಸೂಚನೆ

**ಸಂಖ್ಯೆ: ಆಇ 999 ವೆಚ್ಚ–12/12, ಬೆಂಗಳೂರು, ದಿನಾಂಕ : 6–11–2012.**

ಮದ್ಯದ ಬಾಟಲಿಗಳ ಮೇಲೆ ಅಂಟಿಸುವ ಅಬಕಾರಿ ಭದ್ರತಾ ಚೀಟಿಗಳನ್ನು ಅಬಕಾರಿ ಇಲಾಖೆಯ ಅಗತ್ಯಕ್ಕೆ ಅನುಗುಣವಾಗಿ ಮುದ್ರಿಸಿ ಸರಬರಾಜು ಮಾಡುವ ಕಾರ್ಯವನ್ನು ನೇರವಾಗಿ ಮೆ : MCA ಗೆ ದಿನಾಂಕ : 31–1–2013ರವರೆಗೆ ವಹಿಸಲು ಕರ್ನಾಟಕ ಸಾರ್ವಜನಿಕ ಸಂಗ್ರಹಣೆಗಳಲ್ಲಿ ಪಾರದರ್ಶಕತೆ ಅಧಿನಿಯಮ–1999ರ ಕಲಂ 4(ಜಿ) ರಡಿ ಪ್ರದತ್ತವಾದ ಅಧಿಕಾರ ಚಲಾಯಿಸಿ ಅಬಕಾರಿ ಇಲಾಖೆಗೆ ಪಾರದರ್ಶಕತೆ ಕಾಯ್ದೆಯಿಂದ ವಿನಾಯಿತಿ ನೀಡಿದೆ.

ಉತ್ತಮ ಗುಣಮಟ್ಟದ ಅಬಕಾರಿ ಭದ್ರತಾ ಚೀಟಿಗಳನ್ನು ಸಮಂಜಸ ದರದಲ್ಲಿ ಸಂಗ್ರಹಿಸುವುದನ್ನು ಅಬಕಾರಿ ಇಲಾಖೆಯು ದೃಢಪಡಿಸಿಕೊಳ್ಳುವುದು ಹಾಗೂ ದಿನಾಂಕ : 31–1–2013 ರ ಅವಧಿಯಲ್ಲಿ ಅಬಕಾರಿ ಇಲಾಖೆಯು ಹೊಸದಾಗಿ ಟೆಂಡರ್ ಪ್ರಕ್ರಿಯೆಯನ್ನು ಪ್ರಾರಂಭ ಮಾಡಿ ಮುಗಿಸಲು ಸೂಚಿಸಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ
**ಕಾಂತ. ಎಸ್.**
ಸರ್ಕಾರದ ಅಧೀನ ಕಾರ್ಯದರ್ಶಿ,
ಆರ್ಥಿಕ ಇಲಾಖೆ (ಸಂಗ್ರಹಣಾ ಕೋಶ).

**P.R. 7**

## ಆರ್ಥಿಕ ಸಚಿವಾಲಯ

### ಅಧಿಸೂಚನೆ

**ಸಂಖ್ಯೆ: ಆಇ 902 ವೆಚ್ಚ–12/12, ಬೆಂಗಳೂರು, ದಿನಾಂಕ : 19–10–2012.**

ಮೆ: ಲಿಡ್‌ಕರ್ ಸಂಸ್ಥೆಯು (1) ಆಧುನಿಕ ಮಾರಾಟ ಕುಠೀರ (450 kiosks) ಗಳನ್ನು ರೂ. 364.50 ಲಕ್ಷಗಳ ವೆಚ್ಚದಲ್ಲಿ (2) ಏಕ ವ್ಯಕ್ತಿ ಚರ್ಮಕಾರರ ಕುಠೀರ (300 ಕುಠೀರ) ಗಳನ್ನು ರೂ. 86.40 ಲಕ್ಷಗಳ ವೆಚ್ಚದಲ್ಲಿ (3) ಸಾಮಾನ್ಯ ಸೌಲಭ್ಯ ಕೇಂದ್ರಗಳ ನಿರ್ಮಾಣ (8 ಕೇಂದ್ರಗಳು–ಒಂದಕ್ಕೆ ರೂ. 6.00 ಲಕ್ಷಗಳ ದರದಲ್ಲಿ) ಗಳನ್ನು ರೂ. 48.00 ಲಕ್ಷಗಳ ವೆಚ್ಚದಲ್ಲಿ, ಒಟ್ಟಾರೆ ರೂ. 498.90 ಲಕ್ಷಗಳ ವೆಚ್ಚದಲ್ಲಿ ಸೊಸೈಟಿ ಫಾರ್ ಡೆವಲಪ್‌ಮೆಂಟ್ ಆಫ್ ಕಾಂಪೋಜಿಟ್ಸ್ ಸಂಸ್ಥೆಯಿಂದ ಖರೀದಿಸಲು ಕರ್ನಾಟಕ ಸಾರ್ವಜನಿಕ ಸಂಗ್ರಹಣೆಗಳಲ್ಲಿ ಪಾರದರ್ಶಕತೆ ಅಧಿನಿಯಮ–1999ರ ಕಲಂ 4(ಜಿ) ರಡಿ ಪ್ರದತ್ತವಾದ ಅಧಿಕಾರ ಚಲಾಯಿಸಿ ಸಮಾಜ ಕಲ್ಯಾಣ ಇಲಾಖೆಗೆ ಪಾರದರ್ಶಕತೆ ಕಾಯ್ದೆಯಿಂದ ವಿನಾಯಿತಿ ನೀಡಿದೆ.

ಉತ್ತಮ ಗುಣಮಟ್ಟದ ಸೇವೆಯನ್ನು ಸಮಂಜಸ ದರದಲ್ಲಿ ಸಂಗ್ರಹಿಸುವುದನ್ನು ಸಮಾಜ ಕಲ್ಯಾಣ ಇಲಾಖೆಯು ದೃಢಪಡಿಸಿಕೊಳ್ಳುವುದು.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ
**ಕಾಂತ. ಎಸ್.**
ಸರ್ಕಾರದ ಅಧೀನ ಕಾರ್ಯದರ್ಶಿ,
ಆರ್ಥಿಕ ಇಲಾಖೆ (ಸಂಗ್ರಹಣಾ ಕೋಶ).

**P.R. 8**

## ಆರ್ಥಿಕ ಸಚಿವಾಲಯ

### ತಿದ್ದುಪಡಿ

**ಸಂಖ್ಯೆ: ಆಇ 879 ವೆಚ್ಚ–12/12, ಬೆಂಗಳೂರು, ದಿನಾಂಕ : 19–10–2012.**

ಅಧಿಸೂಚನೆ ಸಂ : ಆಇ 581 ವೆಚ್ಚ–12/2011, ದಿನಾಂಕ : 23–6–2011 ರ ಮೂರನೇ ಸಾಲಿನಲ್ಲಿ ನಮೂದಿಸಿರುವ " ಒಂದು ವರ್ಷದ ಅವಧಿಗೆ" ಎಂಬುದರ ಬದಲಾಗಿ "ಎರಡು ವರ್ಷದ ಅವಧಿಗೆ" ಎಂದು ತಿದ್ದುಪಡಿ ಮಾಡಿ ಓದಿಕೊಳ್ಳತಕ್ಕದ್ದು.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ
**ಕಾಂತ. ಎಸ್.**
ಸರ್ಕಾರದ ಅಧೀನ ಕಾರ್ಯದರ್ಶಿ,
ಆರ್ಥಿಕ ಇಲಾಖೆ (ಸಂಗ್ರಹಣಾ ಕೋಶ).

**P.R. 10**

## ಆರ್ಥಿಕ ಸಚಿವಾಲಯ

### ಅಧಿಸೂಚನೆ

**ಸಂಖ್ಯೆ: ಆಇ 875 ವೆಚ್ಚ–12/12, ಬೆಂಗಳೂರು, ದಿನಾಂಕ : 19–10–2012.**

ಬೆಂಗಳೂರು ಅಂತರಾಷ್ಟ್ರೀಯ ವಿಮಾನ ನಿಲ್ದಾಣದ ಪಕ್ಕದಲ್ಲಿ International Convention Centre Complex ಅನ್ನು ಅಭಿವೃದ್ಧಿಗೊಳಿಸಲು ರೂ. 188.00 ಲಕ್ಷಗಳ ವೆಚ್ಚದಲ್ಲಿ (including service tax) Karnataka Infrastructure Project Development Corporation (KIPDC) ಸಂಸ್ಥೆಯನ್ನು Transaction Advisor ಆಗಿ ನೇಮಕ ಮಾಡಲು ಕರ್ನಾಟಕ ಸಾರ್ವಜನಿಕ ಸಂಗ್ರಹಣೆಗಳಲ್ಲಿ ಪಾರದರ್ಶಕತೆ ಅಧಿನಿಯಮ–1999ರ ಕಲಂ 4(ಜಿ) ರಡಿ ಪ್ರದತ್ತವಾದ ಅಧಿಕಾರ ಚಲಾಯಿಸಿ ಮೂಲಸೌಲಭ್ಯ ಅಭಿವೃದ್ಧಿ ಇಲಾಖೆಗೆ ಪಾರದರ್ಶಕತೆ ಕಾಯ್ದೆಯಿಂದ ವಿನಾಯಿತಿ ನೀಡಿದೆ.

ಉತ್ತಮ ಗುಣಮಟ್ಟದ ಸೇವೆಯನ್ನು ಸಮಂಜಸ ದರದಲ್ಲಿ ಸಂಗ್ರಹಿಸುವುದನ್ನು ಮೂಲಸೌಲಭ್ಯ ಅಭಿವೃದ್ಧಿ ಇಲಾಖೆಯು ದೃಢಪಡಿಸಿಕೊಳ್ಳುವುದು.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ
**ಕಾಂತ. ಎಸ್.**
ಸರ್ಕಾರದ ಅಧೀನ ಕಾರ್ಯದರ್ಶಿ,
ಆರ್ಥಿಕ ಇಲಾಖೆ (ಸಂಗ್ರಹಣಾ ಕೋಶ).

**P.R. 9**

## ಆರ್ಥಿಕ ಸಚಿವಾಲಯ

### ಅಧಿಸೂಚನೆ

**ಸಂಖ್ಯೆ: ಆಇ 964 ವೆಚ್ಚ–12/12, ಬೆಂಗಳೂರು, ದಿನಾಂಕ : 30–10–2012.**

ಹಕ್ಕಿಜ್ವರ ರೋಗದ ನಿಯಂತ್ರಣ ಮತ್ತು ನಿರ್ಮೂಲನೆಗಾಗಿ ಕ್ರಮ ಕೈಗೊಳ್ಳಲು ಅಗತ್ಯವಾದ ಸರಕು, ಸೇವೆಗಳು ಮತ್ತು ಸಾಧನ ಸಾಮಗ್ರಿಗಳನ್ನು ರೂ. 50.00 ಲಕ್ಷಗಳ ವೆಚ್ಚದಲ್ಲಿ ಖರೀದಿಸಲು ಕರ್ನಾಟಕ ಸಾರ್ವಜನಿಕ ಸಂಗ್ರಹಣೆಗಳಲ್ಲಿ ಪಾರದರ್ಶಕತೆ ಅಧಿನಿಯಮ–1999ರ ಕಲಂ 4(ಜಿ) ರಡಿ ಪ್ರದತ್ತವಾದ ಅಧಿಕಾರ ಚಲಾಯಿಸಿ ಪಶುಸಂಗೋಪನೆ ಮತ್ತು ಮೀನುಗಾರಿಕೆ ಇಲಾಖೆಗೆ ಪಾರದರ್ಶಕತೆ ಕಾಯ್ದೆಯಿಂದ ವಿನಾಯಿತಿ ನೀಡಿದೆ.

ಉತ್ತಮ ಗುಣಮಟ್ಟದ ಉತ್ಪನ್ನ/ಸೇವೆಯನ್ನು ಸಮಂಜಸ ದರದಲ್ಲಿ ಸಂಗ್ರಹಿಸುವುದನ್ನು ಪಶುಸಂಗೋಪನೆ ಮತ್ತು ಮೀನುಗಾರಿಕೆ ಇಲಾಖೆಯು ದೃಢಪಡಿಸಿಕೊಳ್ಳುವುದು.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ
**ಕಾಂತ. ಎಸ್.**
ಸರ್ಕಾರದ ಅಧೀನ ಕಾರ್ಯದರ್ಶಿ,
ಆರ್ಥಿಕ ಇಲಾಖೆ (ಸಂಗ್ರಹಣಾ ಕೋಶ).

**P.R. 11**

## ನಗರಾಭಿವೃದ್ಧಿ ಸಚಿವಾಲಯ

### ಅಧಿಸೂಚನೆ

**ಸಂಖ್ಯೆ: ನಅಇ 122 ಗುಅಪ್ರಾ 2012, ಬೆಂಗಳೂರು, ದಿನಾಂಕ : 20–12–2012.**

ಸರ್ಕಾರದ ಅಧಿಸೂಚನೆ ಸಂಖ್ಯೆ : ನಅಇ 184 ಗುಅಪ್ರಾ 2011 ದಿನಾಂಕ: 25–1–2012 ರಲ್ಲಿ ಕುಷ್ಟಗಿ ನಗರವನ್ನು ಪುರಸಭೆಯೇ ಯೋಜನಾ ಪ್ರಾಧಿಕಾರದ ಕೆಲಸ ಕಾರ್ಯಗಳನ್ನು ನಿರ್ವಹಿಸತಕ್ಕದೆಂದು ಅಧಿಸೂಚನೆಯನ್ನು ಹೊರಡಿಸಲಾಗಿರುವುದರಿಂದ ಕರ್ನಾಟಕ ನಗರ ಮತ್ತು ಗ್ರಾಮಾಂತರ ಯೋಜನಾ ಕಾಯ್ದೆ 1961 ರ ಪ್ರಕರಣ 4(ಸಿ) ಉಪ ಪ್ರಕರಣ 3(i) ರಡಿ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ ಶ್ರೀ ತಮ್ಮಣ್ಣಾಚಾರ ಕಂದಕೂರ ರವರನ್ನು ಕುಷ್ಟಗಿ ನಗರ ಯೋಜನಾ ಪ್ರಾಧಿಕಾರದ ಅಧ್ಯಕ್ಷರನ್ನಾಗಿ ಹೊರಡಿಸಲಾದ ಸರ್ಕಾರದ ಅಧಿಸೂಚನೆ ಸಂಖ್ಯೆ : ನಅಇ 122 ಗುಅಪ್ರಾ 2012 ದಿನಾಂಕ : 17–11–2012 ನ್ನು ಕರ್ನಾಟಕ ನಗರ ಮತ್ತು ಗ್ರಾಮಾಂತರ ಯೋಜನಾ ಕಾಯ್ದೆ 1961ರ ನಿಯಮ 76 (ಎನ್) ರಲ್ಲಿ ಪ್ರದತ್ತವಾದ ಅಧಿಕಾರದನ್ವಯ ಹಿಂದಕ್ಕೆ ಪಡೆದು ಆದೇಶಿಸಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ
**ಟಿ.ಎಂ. ವಾಸುದೇವ ರಾವ್**
ಸರ್ಕಾರದ ಅಧೀನ ಕಾರ್ಯದರ್ಶಿ,
ನಗರಾಭಿವೃದ್ಧಿ ಇಲಾಖೆ.

**P.R. 1**

## ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಸಚಿವಾಲಯ

### ಅಧಿಸೂಚನೆ

**ಸಂಖ್ಯೆ: ಸಿಆಸುಇ 205 ಶಿಸನೇ 2012, ಬೆಂಗಳೂರು, ದಿನಾಂಕ : 24–12–2012.**

ಶ್ರೀ ಗಣೇಶ್ ಕಾರ್ಣಿಕ್, ಉಪಾಧ್ಯಕ್ಷರು, ಅನಿವಾಸಿ, ಭಾರತೀಯ ಸಮಿತಿ ಇವರ ನಾಮನಿರ್ದೇಶನವನ್ನು ತಕ್ಷಣದಿಂದ ಜಾರಿಗೆ ಬರುವಂತೆ ರದ್ದುಪಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ
**ಎಸ್. ನಾಗರಾಜಪ್ಪ**
ಸರ್ಕಾರದ ಅಧೀನ ಕಾರ್ಯದರ್ಶಿ–2,
ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಇಲಾಖೆ, (ರಾಜ್ಯ ಶಿಷ್ಟಾಚಾರ).

**P.R. 12**

## ಆರ್ಥಿಕ ಸಚಿವಾಲಯ

### ಅಧಿಸೂಚನೆ

**ಸಂಖ್ಯೆ: ಆಇ 1076 ವೆಚ್ಚ–12/12, ಬೆಂಗಳೂರು, ದಿನಾಂಕ : 29–11–2012.**

Crop Inventory and Updation ಯೋಜನೆಯನ್ನು ಪ್ರಾಯೋಗಿಕವಾಗಿ ತುಮಕೂರು ಜಿಲ್ಲೆ, ಗುಬ್ಬಿ ತಾಲ್ಲೂಕಿನ ನಲ್ಲೂರು ಗ್ರಾಮ ಪಂಚಾಯಿತಿಯಲ್ಲಿ ಅನುಷ್ಠಾನಗೊಳಿಸಲು ಮೆ : **IIMB** Consortium with its member M/s. Zoomin Softech Private Ltd., ಬೆಂಗಳೂರು, ಇವರ ಸೇವೆಯನ್ನು ರೂ. 25.00 ಲಕ್ಷ ಗಳ ಯೋಜನಾ ವೆಚ್ಚದಲ್ಲಿ (Project Cost) ಪಡೆಯಲು ಕರ್ನಾಟಕ ಸಾರ್ವಜನಿಕ ಸಂಗ್ರಹಣೆಗಳಲ್ಲಿ ಪಾರದರ್ಶಕತೆ ಅಧಿನಿಯಮ–1999ರ ಕಲಂ 4(ಜಿ) ರಡಿ ಪ್ರದತ್ತವಾದ ಅಧಿಕಾರ ಚಲಾಯಿಸಿ ಯೋಜನಾ ಇಲಾಖೆಗೆ ಪಾರದರ್ಶಕತೆ ಕಾಯ್ದೆಯಿಂದ ವಿನಾಯಿತಿ ನೀಡಿದೆ.

ಉತ್ತಮ ಗುಣಮಟ್ಟದ ಸೇವೆಯನ್ನು ಸಮಂಜಸ ದರದಲ್ಲಿ ಸಂಗ್ರಹಿಸುವುದನ್ನು ಯೋಜನಾ ಇಲಾಖೆಯು ದೃಢಪಡಿಸಿಕೊಳ್ಳುವುದು.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ
**ಕಾಂತ. ಎಸ್.**
ಸರ್ಕಾರದ ಅಧೀನ ಕಾರ್ಯದರ್ಶಿ,
ಆರ್ಥಿಕ ಇಲಾಖೆ (ಸಂಗ್ರಹಣಾ ಕೋಶ).

**P.R. 13**

## ಆರ್ಥಿಕ ಸಚಿವಾಲಯ

### ಅಧಿಸೂಚನೆ

**ಸಂಖ್ಯೆ: ಆಇ 1057 ವೆಚ್ಚ–12/12, ಬೆಂಗಳೂರು, ದಿನಾಂಕ : 29–11–2012.**

ಖಜಾನೆ ತಂತ್ರಾಂಶದ ಅವಶ್ಯ ಮಾರ್ಪಾಡಿಗೆ ಅನುಕೂಲವಾಗುವಂತೆ, ಒಬ್ಬ ಎಫ್.ಎಂ.ಇ. (Facility Management Engineer) ನ ಸೇವೆಯನ್ನು ಆರು ತಿಂಗಳ ಅವಧಿಗೆ (ದಿನಾಂಕ : 1–10–2012 ರಿಂದ 30–3–2013 ರವರೆಗೆ) ಒಟ್ಟು ರೂ. 3,96,000/– ಗಳ ವೆಚ್ಚದಲ್ಲಿ + ಅನ್ವಯವಾಗುವ ತೆರಿಗೆಗಳೊಂದಿಗೆ ಮೆ: ಸಿ.ಎಂ.ಸಿ. ಸಂಸ್ಥೆ, ಬೆಂಗಳೂರು, ಇವರಿಂದ ನೇರವಾಗಿ ಪಡೆಯಲು ಕರ್ನಾಟಕ ಸಾರ್ವಜನಿಕ ಸಂಗ್ರಹಣೆಗಳಲ್ಲಿ ಪಾರದರ್ಶಕತೆ ಅಧಿನಿಯಮ–1999ರ ಕಲಂ 4(ಜಿ) ರಡಿ ಪ್ರದತ್ತವಾದ ಅಧಿಕಾರ ಚಲಾಯಿಸಿ ಖಜಾನೆ ಇಲಾಖೆಗೆ ಪಾರದರ್ಶಕತೆ ಕಾಯ್ದೆಯಿಂದ ವಿನಾಯಿತಿ ನೀಡಿದೆ.

ಉತ್ತಮ ಗುಣಮಟ್ಟದ ಸೇವೆಯನ್ನು ಸಮಂಜಸ ದರದಲ್ಲಿ ಸಂಗ್ರಹಿಸುವುದನ್ನು ಖಜಾನೆ ಇಲಾಖೆಯು ದೃಢಪಡಿಸಿಕೊಳ್ಳುವುದು.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ
**ಕಾಂತ. ಎಸ್.**
ಸರ್ಕಾರದ ಅಧೀನ ಕಾರ್ಯದರ್ಶಿ,
ಆರ್ಥಿಕ ಇಲಾಖೆ (ಸಂಗ್ರಹಣಾ ಕೋಶ).

**P.R. 14**

## ಆರ್ಥಿಕ ಸಚಿವಾಲಯ

### ಅಧಿಸೂಚನೆ

**ಸಂಖ್ಯೆ: ಆಇ 1012 ವೆಚ್ಚ–12/12, ಬೆಂಗಳೂರು, ದಿನಾಂಕ : 24–11–2012.**

ಹೊಸದಾಗಿ ಆಯ್ದೆಯಾಗಿರುವ ಕರ್ನಾಟಕ ವಿಧಾನ ಪರಿಷತ್ತಿನ ಮಾನ್ಯ ಸದಸ್ಯರುಗಳಿಗಾಗಿ ಮೆ: ಮೊಬಿಟೆಲ್, ಬೆಂಗಳೂರು, ಇವರಿಂದ Apple I Pad3 64 GB 4G+ WIFI ಮಾದರಿಯ 13 ಐ–ಪ್ಯಾಡ್‌ಗಳನ್ನು ರೂ. 6,48,466/–ಗಳ ವೆಚ್ಚದಲ್ಲಿ ಖರೀದಿಸಲು ಕರ್ನಾಟಕ ಸಾರ್ವಜನಿಕ ಸಂಗ್ರಹಣೆಗಳಲ್ಲಿ ಪಾರದರ್ಶಕತೆ ಅಧಿನಿಯಮ–1999ರ ಕಲಂ 4(ಜಿ) ರಡಿ ಪ್ರದತ್ತವಾದ ಅಧಿಕಾರ ಚಲಾಯಿಸಿ ಕರ್ನಾಟಕ ವಿಧಾನ ಮಂಡಲ ಸಚಿವಾಲಯಕ್ಕೆ ಪಾರದರ್ಶಕತೆ ಕಾಯ್ದೆಯಿಂದ ವಿನಾಯಿತಿ ನೀಡಿದೆ.

ಉತ್ತಮ ಗುಣಮಟ್ಟದ ಐ–ಪ್ಯಾಡ್‌ಗಳನ್ನು ಸಮಂಜಸ ದರದಲ್ಲಿ ಸಂಗ್ರಹಿಸುವುದನ್ನು ಕರ್ನಾಟಕ ವಿಧಾನ ಮಂಡಲ ಸಚಿವಾಲಯವು ದೃಢಪಡಿಸಿಕೊಳ್ಳುವುದು.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ
**ಕಾಂತ. ಎಸ್.**
ಸರ್ಕಾರದ ಅಧೀನ ಕಾರ್ಯದರ್ಶಿ,
ಆರ್ಥಿಕ ಇಲಾಖೆ (ಸಂಗ್ರಹಣಾ ಕೋಶ).

**P.R. 15**

## ಆರ್ಥಿಕ ಸಚಿವಾಲಯ

### ತಿದ್ದುಪಡಿ

**ಸಂಖ್ಯೆ: ಆಇ 952 ವೆಚ್ಚ–12/12, ಬೆಂಗಳೂರು, ದಿನಾಂಕ : 20–11–2012.**

ಅಧಿಸೂಚನೆ ಸಂ : ಆಇ 470 ವೆಚ್ಚ–12/12, ದಿನಾಂಕ : 5–6–2012ರ ಎರಡನೇ ಸಾಲಿನಲ್ಲಿ ನಮೂದಿಸಿರುವ **"**ರೂ. 12,36,350/–ಗಳ**"** ಬದಲಾಗಿ ರೂ. 16,35,007/– ಎಂದು ತಿದ್ದುಪಡಿ ಮಾಡಿ ಓದಿಕೊಳ್ಳತಕ್ಕದ್ದು.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ
**ಕಾಂತ. ಎಸ್.**
ಸರ್ಕಾರದ ಅಧೀನ ಕಾರ್ಯದರ್ಶಿ,
ಆರ್ಥಿಕ ಇಲಾಖೆ (ಸಂಗ್ರಹಣಾ ಕೋಶ).

**P.R. 16**

## ಆರ್ಥಿಕ ಸಚಿವಾಲಯ

### ತಿದ್ದುಪಡಿ

**ಸಂಖ್ಯೆ: ಆಇ 1026 ವೆಚ್ಚ–12/12, ಬೆಂಗಳೂರು, ದಿನಾಂಕ : 4–12–2012.**

ಅಧಿಸೂಚನೆ ಸಂ : ಆಇ 875 ವೆಚ್ಚ–12/2012, ದಿನಾಂಕ : 19–10–2012 ರ 3ನೇ ಸಾಲಿನಲ್ಲಿ ನಮೂದಿಸಿರುವ "Karnataka Infrastructure Project Development Corporation (KIPDC)" ಎಂಬುದರ ಬದಲಾಗಿ "KSIIDC-IL&FS Project Development Company Limited" ಎಂದು ತಿದ್ದುಪಡಿ ಮಾಡಿ ಓದಿಕೊಳ್ಳತಕ್ಕದ್ದು.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ
**ಕಾಂತ. ಎಸ್.**
ಸರ್ಕಾರದ ಅಧೀನ ಕಾರ್ಯದರ್ಶಿ,
ಆರ್ಥಿಕ ಇಲಾಖೆ (ಸಂಗ್ರಹಣಾ ಕೋಶ).

**P.R. 17**

## ಆರ್ಥಿಕ ಸಚಿವಾಲಯ

### ಅಧಿಸೂಚನೆ

**ಸಂಖ್ಯೆ: ಆಇ 1073 ವೆಚ್ಚ–12/12, ಬೆಂಗಳೂರು, ದಿನಾಂಕ : 6–12–2012.**

ಬೆಳಗಾವಿಯಲ್ಲಿ ಜರುಗಲಿರುವ ವಿಧಾನ ಮಂಡಲ ಅಧಿವೇಶನಕ್ಕೆ ಅಗತ್ಯವಿರುವ ಎಲ್ಲಾ ವ್ಯವಸ್ಥೆಗಳನ್ನು ರೂ. 500.00 ಲಕ್ಷಗಳ ವೆಚ್ಚದಲ್ಲಿ ಜಿಲ್ಲಾಧಿಕಾರಿ, ಬೆಳಗಾವಿ, ಇವರ ಮೂಲಕ ಕೈಗೊಳ್ಳಲು ಕರ್ನಾಟಕ ಸಾರ್ವಜನಿಕ ಸಂಗ್ರಹಣೆಗಳಲ್ಲಿ ಪಾರದರ್ಶಕತೆ ಅಧಿನಿಯಮ–1999ರ ಕಲಂ 4(ಜಿ) ರಡಿ ಪ್ರದತ್ತವಾದ ಅಧಿಕಾರ ಚಲಾಯಿಸಿ ಕರ್ನಾಟಕ ವಿಧಾನ ಸಭೆ ಸಚಿವಾಲಯಕ್ಕೆ ಪಾರದರ್ಶಕತೆ ಕಾಯ್ದೆಯಿಂದ ವಿನಾಯಿತಿ ನೀಡಿದೆ.

ಉತ್ತಮ ಗುಣಮಟ್ಟದ ಕಾಮಗಾರಿಗಳನ್ನು ಸಮಂಜಸ ದರದಲ್ಲಿ ಸಂಗ್ರಹಿಸುವುದನ್ನು ಕರ್ನಾಟಕ ವಿಧಾನ ಸಭೆ ಸಚಿವಾಲಯವು ದೃಢಪಡಿಸಿಕೊಳ್ಳುವುದು.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ
**ಕಾಂತ. ಎಸ್.**
ಸರ್ಕಾರದ ಅಧೀನ ಕಾರ್ಯದರ್ಶಿ,
ಆರ್ಥಿಕ ಇಲಾಖೆ (ಸಂಗ್ರಹಣಾ ಕೋಶ).

**P.R. 18**

## ಆರ್ಥಿಕ ಸಚಿವಾಲಯ

### ಅಧಿಸೂಚನೆ

**ಸಂಖ್ಯೆ: ಆಇ 1034 ವೆಚ್ಚ–12/12, ಬೆಂಗಳೂರು, ದಿನಾಂಕ : 6–12–2012.**

ಶ್ರೀ ಚಂದ್ರಶೇಖರ ಜಿ. ಹುನಗುಂದ, ನಿವೃತ್ತ ಜಿಲ್ಲಾ ನ್ಯಾಯಾಧೀಶರು, ಇವರ ಸೇವೆಯನ್ನು ಮಾಸಿಕ ರೂ. 50,000/– ಗಳ ಸಮಾಲೋಚನಾ ಶುಲ್ಕದಲ್ಲಿ ಗಣಿ ಮತ್ತು ಭೂ–ವಿಜ್ಞಾನ ಇಲಾಖೆಯಲ್ಲಿ ಕಾನೂನು ಸಮಾಲೋಚಕರಾಗಿ ದಿನಾಂಕ : 30–9–2012 ರಿಂದ ಒಂದು ವರ್ಷದ ಅವಧಿಗೆ ನೇರವಾಗಿ ಪಡೆಯಲು ಕರ್ನಾಟಕ ಸಾರ್ವಜನಿಕ ಸಂಗ್ರಹಣೆಗಳಲ್ಲಿ ಪಾರದರ್ಶಕತೆ ಅಧಿನಿಯಮ–1999ರ ಕಲಂ 4(ಜಿ) ರಡಿ ಪ್ರದತ್ತವಾದ ಅಧಿಕಾರ ಚಲಾಯಿಸಿ ವಾಣಿಜ್ಯ ಮತ್ತು ಕೈಗಾರಿಕೆ ಇಲಾಖೆಗೆ ಪಾರದರ್ಶಕತೆ ಕಾಯ್ದೆಯಿಂದ ವಿನಾಯಿತಿ ನೀಡಿದೆ.

ಉತ್ತಮ ಗುಣಮಟ್ಟದ ಕಾಮಗಾರಿಗಳನ್ನು ಸಮಂಜಸ ದರದಲ್ಲಿ ಸಂಗ್ರಹಿಸುವುದನ್ನು ವಾಣಿಜ್ಯ ಮತ್ತು ಕೈಗಾರಿಕೆ ಇಲಾಖೆಯು ದೃಢಪಡಿಸಿಕೊಳ್ಳುವುದು.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ
**ಕಾಂತ. ಎಸ್.**
ಸರ್ಕಾರದ ಅಧೀನ ಕಾರ್ಯದರ್ಶಿ,
ಆರ್ಥಿಕ ಇಲಾಖೆ (ಸಂಗ್ರಹಣಾ ಕೋಶ).

**P.R. 19**

## ಆರ್ಥಿಕ ಸಚಿವಾಲಯ

### ಅಧಿಸೂಚನೆ

**ಸಂಖ್ಯೆ: ಆಇ 1084 ವೆಚ್ಚ–12/12, ಬೆಂಗಳೂರು, ದಿನಾಂಕ : 7–12–2012.**

ಅಬಕಾರಿ ಇಲಾಖೆಯ ಇ–ಪಾವತಿ ವ್ಯವಸ್ಥೆಯನ್ನು **NIC** ಮೂಲಕ ರೂ. 6.18 ಲಕ್ಷಗಳ ವೆಚ್ಚದಲ್ಲಿ ನೇರವಾಗಿ ಕೈಗೊಳ್ಳಲು ಕರ್ನಾಟಕ ಸಾರ್ವಜನಿಕ ಸಂಗ್ರಹಣೆಗಳಲ್ಲಿ ಪಾರದರ್ಶಕತೆ ಅಧಿನಿಯಮ–1999ರ ಕಲಂ 4(ಜಿ) ರಡಿ ಪ್ರದತ್ತವಾದ ಅಧಿಕಾರ ಚಲಾಯಿಸಿ ಅಬಕಾರಿ ಇಲಾಖೆಗೆ ಪಾರದರ್ಶಕತೆ ಕಾಯ್ದೆಯಿಂದ ವಿನಾಯಿತಿ ನೀಡಿದೆ.

ಉತ್ತಮ ಗುಣಮಟ್ಟದ ಸೇವೆಯನ್ನು ಸಮಂಜಸ ದರದಲ್ಲಿ ಸಂಗ್ರಹಿಸುವುದನ್ನು ಅಬಕಾರಿ ಇಲಾಖೆಯು ದೃಢಪಡಿಸಿಕೊಳ್ಳುವುದು.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ
**ಕಾಂತ. ಎಸ್.**
ಸರ್ಕಾರದ ಅಧೀನ ಕಾರ್ಯದರ್ಶಿ,
ಆರ್ಥಿಕ ಇಲಾಖೆ (ಸಂಗ್ರಹಣಾ ಕೋಶ).

**P.R. 20**

## ಆರ್ಥಿಕ ಸಚಿವಾಲಯ

### ಅಧಿಸೂಚನೆ

**ಸಂಖ್ಯೆ: ಆಇ 1075 ವೆಚ್ಚ–12/12, ಬೆಂಗಳೂರು, ದಿನಾಂಕ : 29–11–2012.**

ಶ್ರೀ ಎ.ಸಿ. ಸೂರ್ಯಪ್ರಕಾಶ್, ನಿವೃತ್ತ ವಾಣಿಜ್ಯ ತೆರಿಗೆ ಅಪರ ಆಯುಕ್ತರು, ಇವರ ಸೇವೆಯನ್ನು ರೂ. 60,000/– ಗಳ ಸಮಾಲೋಚನ ಶುಲ್ಕ ಹಾಗೂ ವಾಹನ ವ್ಯವಸ್ಥೆಯೊಡನೆ ಒಂದು ವರ್ಷದ ಅವಧಿಗೆ ಸಮಾಲೋಚಕರನ್ನಾಗಿ ಪಡೆಯಲು ಕರ್ನಾಟಕ ಸಾರ್ವಜನಿಕ ಸಂಗ್ರಹಣೆಗಳಲ್ಲಿ ಪಾರದರ್ಶಕತೆ ಅಧಿನಿಯಮ–1999ರ ಕಲಂ 4(ಜಿ) ರಡಿ ಪ್ರದತ್ತವಾದ ಅಧಿಕಾರ ಚಲಾಯಿಸಿ ವಾಣಿಜ್ಯ ತೆರಿಗೆ ಇಲಾಖೆಗೆ ಪಾರದರ್ಶಕತೆ ಕಾಯ್ದೆಯಿಂದ ವಿನಾಯಿತಿ ನೀಡಿದೆ.

ಉತ್ತಮ ಗುಣಮಟ್ಟದ ಸೇವೆಯನ್ನು ಸಮಂಜಸ ದರದಲ್ಲಿ ಸಂಗ್ರಹಿಸುವುದನ್ನು ವಾಣಿಜ್ಯ ತೆರಿಗೆ ಇಲಾಖೆಯು ದೃಢಪಡಿಸಿಕೊಳ್ಳುವುದು.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ

**ಕಾಂತ. ಎಸ್.**

ಸರ್ಕಾರದ ಅಧೀನ ಕಾರ್ಯದರ್ಶಿ,

ಆರ್ಥಿಕ ಇಲಾಖೆ (ಸಂಗ್ರಹಣಾ ಕೋಶ).

**P.R. 21**

## ಆರ್ಥಿಕ ಸಚಿವಾಲಯ

### ಅಧಿಸೂಚನೆ

**ಸಂಖ್ಯೆ: ಆಇ 974 ವೆಚ್ಚ–12/12, ಬೆಂಗಳೂರು, ದಿನಾಂಕ : 4–12–2012.**

ಅಲ್ಪಸಂಖ್ಯಾತರ ಕಲ್ಯಾಣ ಇಲಾಖೆ ವತಿಯಿಂದ ಕೌಶಲ್ಯ ಅಭಿವೃದ್ಧಿ ಯೋಜನೆಯಡಿ ಅಲ್ಪಸಂಖ್ಯಾತರ ಯುವಕ/ಯುವತಿಯರಿಗೆ ಕೇಂದ್ರ ಸರ್ಕಾರಿ ಸ್ವಾಮ್ಯದ Central Institute of Plastic Engineering and Technology (CIPET), ಮೈಸೂರು, ಸಂಸ್ಥೆಯಿಂದ ನೇರವಾಗಿ ಪ್ಲಾಸ್ಟಿಕ್ ತಂತ್ರಜ್ಞಾನದಲ್ಲಿ ತರಬೇತಿಗಳನ್ನು 2012–13ನೇ ಸಾಲಿಗೆ ನೀಡಲು ಕರ್ನಾಟಕ ಸಾರ್ವಜನಿಕ ಸಂಗ್ರಹಣೆಗಳಲ್ಲಿ ಪಾರದರ್ಶಕತೆ ಅಧಿನಿಯಮ–1999ರ ಕಲಂ 4(ಜಿ) ರಡಿ ಪ್ರದತ್ತವಾದ ಅಧಿಕಾರ ಚಲಾಯಿಸಿ ಅಲ್ಪಸಂಖ್ಯಾತರ ಕಲ್ಯಾಣ ಇಲಾಖೆಗೆ ಪಾರದರ್ಶಕತೆ ಕಾಯ್ದೆಯಿಂದ ವಿನಾಯಿತಿ ನೀಡಿದೆ.

ಉತ್ತಮ ಗುಣಮಟ್ಟದ ತರಬೇತಿಗಳನ್ನು ಸಮಂಜಸ ದರದಲ್ಲಿ ಸಂಗ್ರಹಿಸುವುದನ್ನು ಅಲ್ಪಸಂಖ್ಯಾತರ ಕಲ್ಯಾಣ ಇಲಾಖೆಯು ದೃಢಪಡಿಸಿಕೊಳ್ಳುವುದು.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ

**ಕಾಂತ. ಎಸ್.**

ಸರ್ಕಾರದ ಅಧೀನ ಕಾರ್ಯದರ್ಶಿ,

ಆರ್ಥಿಕ ಇಲಾಖೆ (ಸಂಗ್ರಹಣಾ ಕೋಶ).

**P.R. 22**

## ಆರ್ಥಿಕ ಸಚಿವಾಲಯ

### ಅಧಿಸೂಚನೆ

**ಸಂಖ್ಯೆ: ಆಇ 1059 ವೆಚ್ಚ–12/12, ಬೆಂಗಳೂರು, ದಿನಾಂಕ : 6–12–2012.**

ಬೆಂಗಳೂರಿನ ಖನಿಜ ಭವನ ಕಟ್ಟಡದಲ್ಲಿ ಸ್ಥಾಪಿಸಲು ಉದ್ದೇಶಿಸಿರುವ ಆರ್ಬಿಟ್ರೇಷನ್ ಲಾ ಸೆಂಟರ್‌ನ ರೂ. 180.00 ಲಕ್ಷಗಳ ವೆಚ್ಚದ ಒಳಾಂಗಣ ಕಾಮಗಾರಿಗಳನ್ನು ಲೋಕೋಪಯೋಗಿ ಇಲಾಖೆಗೆ ನೇರವಾಗಿ ವಹಿಸಲು ಕರ್ನಾಟಕ ಸಾರ್ವಜನಿಕ ಸಂಗ್ರಹಣೆಗಳಲ್ಲಿ ಪಾರದರ್ಶಕತೆ ಅಧಿನಿಯಮ–1999ರ ಕಲಂ 4(ಜಿ) ರಡಿ ಪ್ರದತ್ತವಾದ ಅಧಿಕಾರ ಚಲಾಯಿಸಿ ಸಿ.ಆ.ಸು. ಇಲಾಖೆಗೆ ಪಾರದರ್ಶಕತೆ ಕಾಯ್ದೆಯಿಂದ ವಿನಾಯಿತಿ ನೀಡಿದೆ.

ಉತ್ತಮ ಗುಣಮಟ್ಟದ ಕಾಮಗಾರಿಗಳನ್ನು ಸಮಂಜಸ ದರದಲ್ಲಿ ಸಂಗ್ರಹಿಸುವುದನ್ನು ಸಿ.ಆ.ಸು. ಇಲಾಖೆಯು ದೃಢಪಡಿಸಿಕೊಳ್ಳುವುದು.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ

**ಕಾಂತ. ಎಸ್.**

ಸರ್ಕಾರದ ಅಧೀನ ಕಾರ್ಯದರ್ಶಿ,

ಆರ್ಥಿಕ ಇಲಾಖೆ (ಸಂಗ್ರಹಣಾ ಕೋಶ).

**P.R. 23**

## ಕನ್ನಡ ಸಂಸ್ಕೃತಿ ಮತ್ತು ವಾರ್ತಾ ಸಚಿವಾಲಯ

### ಅಧಿಸೂಚನೆ

**ಸಂಖ್ಯೆ: ಕಸಂವಾಪ್ರ 125 ಕೆಎಂಯು 2011, ಬೆಂಗಳೂರು, ದಿನಾಂಕ : 12–12–2012.**

ಮೈಸೂರು ಜಿಲ್ಲೆಯ ಟಿ. ನರಸೀಪುರ ತಾಲ್ಲೂಕು ಸೋಮನಾಥಪುರ ಗ್ರಾಮದಲ್ಲಿರುವ ಪಂಚಲಿಂಗೇಶ್ವರ ದೇವಸ್ಥಾನವನ್ನು "ರಾಜ್ಯ ಸಂರಕ್ಷಿತ ಪಾರಂಪರಿಕ ಸ್ಮಾರಕ" ವೆಂದು ಘೋಷಿಸಿರುವ ದಿನಾಂಕ : 25–10–2010ರ ಅಧಿಸೂಚನೆ ಸಂ : ಕಸಂವಾಪ್ರ 128 ಕೆಎಂಯು 2008 ನ್ನು ರದ್ದುಪಡಿಸುತ್ತಾ, ಕರ್ನಾಟಕ ಸರ್ಕಾರವು ಪರಿವಿಡಿಯಲ್ಲಿ ವಿವರಿಸಿರುವ ಮೈಸೂರು ಜಿಲ್ಲೆಯ ಟಿ. ನರಸೀಪುರ ತಾಲ್ಲೂಕು ಸೋಮನಾಥಪುರ ಗ್ರಾಮದಲ್ಲಿರುವ ಪಂಚಲಿಂಗೇಶ್ವರ ದೇವಸ್ಥಾನವನ್ನು " ಕರ್ನಾಟಕ ಪ್ರಾಚೀನ ಮತ್ತು ಐತಿಹಾಸಿಕ ಸ್ಮಾರಕ ಮತ್ತು ಪುರಾತತ್ವ ನಿವೇಶನಗಳು ಮತ್ತು ಅವಶೇಷಗಳ ಅಧಿನಿಯಮ 1961ರ ಕಲಂ 4(1)ರಡಿ" (ಕರ್ನಾಟಕ ಆಕ್ಟ್ 1962) ರಾಜ್ಯ ಸಂರಕ್ಷಿತ ಪಾರಂಪರಿಕ ಸ್ಮಾರಕವನ್ನಾಗಿ ಘೋಷಿಸಲು ಅಭಿಪ್ರಾಯ ಪಟ್ಟು ಅದರಂತೆ 2008ರ ಡಿಸೆಂಬರ್ 4ನೇ ದಿನಾಂಕದ ಕರ್ನಾಟಕ ರಾಜ್ಯ ಪತ್ರದ "ಭಾಗ–4 ಎ" ದಿನಾಂಕ : 12–11–2008ರ ಅಧಿಸೂಚನೆ ಸಂಖ್ಯೆ : ಕಸಂವಾಪ್ರ 128 ಕೆಎಂಯು 2008 ನ್ನು ಪ್ರಕಟಿಸಿ, ಅದರಿಂದ ಭಾದಿತರಾಗುವ ಎಲ್ಲಾ ವ್ಯಕ್ತಿಗಳಿಂದ ಆಕ್ಷೇಪಣೆಗಳನ್ನು ಆಹ್ವಾನಿಸಿ ಪ್ರಕಟಿಸಿದ್ದರಿಂದ ಮತ್ತು ಸದರಿ ರಾಜ್ಯ ಪತ್ರವನ್ನು

ದಿನಾಂಕ: 4–12–2008ರಂದು ಸಾರ್ವಜನಿಕರಿಗೆ ಲಭ್ಯವಾಗುವಂತೆ ಮಾಡಿದ್ದು, ಈ ಬಗ್ಗೆ ಸ್ವೀಕೃತವಾದ ಆಕ್ಷೇಪಣೆ/ಸಲಹೆಗಳನ್ನು ಪರಿಗಣಿಸಿ ಈಗ "ಕರ್ನಾಟಕ ಪ್ರಾಚೀನ ಮತ್ತು ಐತಿಹಾಸಿಕ ಸ್ಮಾರಕಗಳು ಮತ್ತು ಪುರಾತತ್ವ ಸ್ಥಳಗಳು ಮತ್ತು ಅವಶೇಷಗಳ ಅಧಿನಿಯಮ 1961ರ ಕಲಂ 4(3)" ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ, ಪರಿವಿಡಿಯಲ್ಲಿ ವಿವರಿಸಿರುವ ಮೈಸೂರ ಜಿಲ್ಲೆಯ ಟಿ. ನರಸೀಪುರ ತಾಲ್ಲೂಕು ಸೋಮನಾಥಪುರ ಗ್ರಾಮದಲ್ಲಿರುವ ಪಂಚಲಿಂಗೇಶ್ವರ ದೇವಸ್ಥಾನವನ್ನು "ರಾಜ್ಯ ಸಂರಕ್ಷಿತ ಪಾರಂಪರಿಕ ಸ್ಮಾರಕ" ವೆಂದು ಈ ಮೂಲಕ ಘೋಷಿಸಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ
**ಜಿ.ಬಿ. ಹೇಮಣ್ಣ**
ಸರ್ಕಾರದ ಅಧೀನ ಕಾರ್ಯದರ್ಶಿ,
ಕನ್ನಡ ಸಂಸ್ಕೃತಿ, ಮತ್ತು ವಾರ್ತಾ ಇಲಾಖೆ (ಆಡಳಿತ ಕನ್ನಡ).

**ಪರಿವಿಡಿ**

**(ಅಧಿಸೂಚನೆ ಸಂಖ್ಯೆ : ಕಸಂವಾಪ್ರ 125 ಕೆಎಂಯು 2011, ದಿನಾಂಕ : 12–12–2012)**

| ಜಿಲ್ಲೆ | ತಾಲ್ಲೂಕು | ಇರುವ ಸ್ಥಳ | ಸ್ಮಾರಕ/ಕಟ್ಟಡದ ಹೆಸರು | ಸಂರಕ್ಷಣೆಗೆ ಒಳಪಡ ಬಹುದಾದ ರೆವಿನ್ಯೂ ನಿವೇಶನ | ವಿಸ್ತೀರ್ಣ | ಮೇರೆಗಳು ಚಕ್ಕು ಬಂದಿ | | ಒಡೆತನ | ಷರಾ |
|---|---|---|---|---|---|---|---|---|---|
| 1 | 2 | 3 | 4 | 5 | 6 | 7 | | 8 | 9 |
| ಮೈಸೂರು | ಟಿ. ನರಸೀಪುರ | ಸೋಮನಾಥಪುರ | ಶ್ರೀ ಪಂಚಲಿಂಗೇಶ್ವರ ದೇವಸ್ಥಾನ | ಸ.ನಂ. 252 | 1 ಎಕರೆ 10 ಗುಂಟೆ | ಪೂರ್ವಕ್ಕೆ | ಒಣ | 'ಬಿ' ಖರಾಬು ಸರ್ಕಾರಿ (ಕಂದಾಯ ಇಲಾಖೆ) | ಕ್ರಿ.ಶ. 13ನೇ ಶತಮಾನಕ್ಕೆ ಸೇರಿದ ಹೊಯ್ಸಳರ ಕಾಲದ ದೇವಸ್ಥಾನ |
| | | | | | | ಪಶ್ಚಿಮಕ್ಕೆ | ಸ.ನಂ. 5 | | |
| | | | | | | ಉತ್ತರಕ್ಕೆ | ಸ.ನಂ. 7 | | |
| | | | | | | ದಕ್ಷಿಣಕ್ಕೆ | ಒಣ | | |

**ಜಿ.ಬಿ. ಹೇಮಣ್ಣ**
ಸರ್ಕಾರದ ಅಧೀನ ಕಾರ್ಯದರ್ಶಿ,
ಕನ್ನಡ ಸಂಸ್ಕೃತಿ, ಮತ್ತು ವಾರ್ತಾ ಇಲಾಖೆ (ಆಡಳಿತ ಕನ್ನಡ).

P.R. 24

## KARNATAKA GOVERNOR'S SECRETARIAT

### NOTIFICATION

### No: GS 12 LUM 2012, Bangalore, 2nd January 2013.

In Exercise of the powers conferred on me by Section 29(1) of the Karnataka State Law University Act, 2009, I. H.R. BHARDWAJ, Governor of Karnataka and Chancellor of Universities in Karnataka hereby re-constitute the Syndicate of the Karnataka State Law University, Hubli, as follows :-

| Section | Category | Sl. No. | Nomination |
|---|---|---|---|
| 29(2) | Vice-Chancellor | 1 | Vice-Chancellor as Ex-officio Chairman |
| 29(3)(a) | The Secretary to Government Department of Law, Justice and Human Rights or his nominee not below the rank of Additional Secretary to Government-Ex-officio Member | 2 | The Principal Secretary to Government Department of Law, Justice and Human Rights or his nominee not below the rank of Additional Secretary to Government. |
| 29(3)(b) | The Secretary to Government Department of Parliamentary Affairs and Legislation or his nominee not below the rank of Joint Secretary to Government Ex-officio Member | 3 | The Secretary to Government Department of Parliamentary Affairs and Legislation or his nominee not below the rank of Joint Secretary to Government |
| 29(3)(C) | The Principal Secretary to Government, Higher Education Department Ex-officio Member | 4 | The Principal Secretary to Government, Higher Education Department |
| 29(3)(d) | The Commissioner or Additional Commissioner for Collegiate Edcuation or his nominee not below the rank of Joint Director of Collegiate Education nominated by the State Government. | 5 | The Commissioner or Additional Commissioner for Collegiate Edcuation or his nominee not below the rank of Joint Director of Collegiate Education nominated by the State Government. |
| 29(3)(e) | One Dean nominated by the Vice Chancellor by rotation for a period of one year | 6 | Prof. G.R. Jagadeesh,<br>Principal, National Law College, Shimoga. |

| Section | Category | Sl. No. | Nomination |
|---|---|---|---|
| 29(3)(f) | Two University Professors from among the heads of Departments of Study and Research, School of Excellence or Centers of advanced Studies nominated by the Government on the recommendation of the Vice Chancellor by rotation according to seniority | 7<br>8 | Vacant<br>Vacant |
| 29(3)(g) | Five members nominated by the Govenrnment of whom one shall be a person belonging to the SC or ST, one to other Backward Classes and three others of whom one shall be a woman from among the members of the legal profession or from the members of the law teaching faculty. | 9<br>10<br>11<br>12<br>13 | Sri Premkumar-(SC)<br>Sri Sudhir Singh Rajaram Rao Ghorpade-(OBC)<br>Sri Anoop Deshpande-(General)<br>Sri Jagadish Shenava-(General)<br>Smt. Hampali Nagaveni (Women) |
| 29(3)(h) | Two Principals of affiliated or constituent colleges nominated by the Vice Chancellor | 14<br>15 | Prof. J.R. Talageri, Principal, M.E.S. Law College, Sirsi. (for a period of 17 months)<br>Prof. Smt. P.K. Himalakshi, Principal, V.V. Puram Law College, Bangalore |
| 29(3)(i) | Two members nominated by the Chancellor from among eminent educationists or persons from the field of legal education. | 16<br>17 | Dr. Gururaj Karajagi, M.Sc., Ph.D. Chairman, Academy for Creative Training (ACT), No. 480, 6th Main, Opp. Bus Depot, HMT Layout, R.T. Nagar, Bangalore-560 032.<br>Dr. Suresh V. Nadagoudar, Associate Professor of Law and Chairman, PG Department of Studies and Research in Law and University of Law College, Bangalore University, Jnanabharathi, Bangalore. |

The term of office of the nominated members except member nominated under Section 29(3)(e) of the Act shall be for a period of three years or till the Syndicate is re-constitued whichever is earlier.

The term of the member nominated by the Vice-Chancellor, Karnataka State Law University, Hubli, under Section 29(3)(e) of the Act Shall be for a period of one year.

**H.R. BHARDWAJ**
Governor of Karnataka and Chancellor of Universities
**R. KALPANA**
Under Secretary to Governor. (Administration)

**P.R. 25**

## ಸಿಬ್ಬಂದಿ ಮತ್ತು ಆಡಳಿತ ಸುಧಾರಣಾ ಸಚಿವಾಲಯ

### ಅಧಿಸೂಚನೆ

**ಸಂಖ್ಯೆ: ಸಿಆಸುಇ 44 ಎಸ್‌ಎಂಆರ್ 2012, ಬೆಂಗಳೂರು, ದಿನಾಂಕ : 2–1–2013.**

ಕರ್ನಾಟಕ ಸರ್ಕಾರಿ ನೌಕರರ (ವೈದ್ಯಕೀಯ ಹಾಜರಾತಿ) ನಿಯಮಗಳು 1963 ರ ನಿಯಮ 3 ರ ಖಂಡ (ಎಫ್‌ಎಫ್)ನ ಮೂಲಕ ಪ್ರದತ್ತವಾದ ಅಧಿಕಾರಗಳನ್ನು ಚಲಾಯಿಸಿ, ಕರ್ನಾಟಕ ಸರ್ಕಾರವು ಸದರಿ ನಿಯಮಗಳ ಷೆಡ್ಯೂಲ್–I ರ ಐಟಂ 313 ರ ನಂತರ ಈ ಕೆಳಕಂಡ ಐಟಂನ್ನು ಸೇರ್ಪಡೆಗೊಳಿಸಿದೆ:–

(314) ಕ್ಷೇಮ ಆರ್ಥೋಪೆಡಿಕ್ ಹಾಸ್ಪಿಟಲ್ಸ್ ಪ್ರೈವೇಟ್ ಲಿಮಿಟೆಡ್, ಹಾಸ್ಪಿಟಲ್ ಫಾರ್ ಸ್ಪೆಷಲ್ ಸರ್ಜರಿ, ಕೆ.ಎಸ್.ಆರ್.ಟಿ.ಸಿ. ಡಿಪೋ ಹತ್ತಿರ, 18/1, ಗ್ರೀನ್ ಗಾರ್ಡನ್ಸ್, ಗೋಕುಲ್ ರಸ್ತೆ, ಹುಬ್ಬಳ್ಳಿ–580 030.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ
**ಡಿ. ನಾಗೇಶ್ ಪಾಟಕ್**
ಸರ್ಕಾರದ ಅಧೀನ ಕಾರ್ಯದರ್ಶಿ,
ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಇಲಾಖೆ (ಸೇವಾ ನಿಯಮಗಳು–2).

## PERSONNEL AND ADMINISTRATIVE REFORMS SECRETARIAT

### NOTIFICATION

**No: DPAR 44 SMR 2012, Bangalore, 2-1-2013.**

In exercise of the powers conferred by clause (ff) of rule 3 of the Karnataka Government Servants' (Medical Attendance) Rules 1963, the Government of Karnataka hereby adds the following item after iterm 313 of Schedule I to the said rules, namely :-

(314) Kshem Orthopaedic Hospitals Pvt. Ltd., Hospital for Special Surgery, Near K.S.R.T.C. Deport, 18/1 Green Gardens, Gokul Road, Hubli-580 030.

By Order and in the name of the Governor of Karnataka,

**D. NAGESH PHATAK**

Under Secretary to Government,

Department of Personnel and Administrative Reforms (Service Rules-2).

**P.R. 27**

## PERSONNEL AND ADMINISTRATIVE REFORMS SECRETARIAT

### NOTIFICATION

### No: DPAR 01 SMR 2012, Bangalore, 2-1-2013.

In exercise of the powers conferred by clause (ff) of rule 3 of the Karnataka Government Servants' (Medical Attendance) Rules 1963, the Government of Karnataka hereby adds the following item after iterm 312 of Schedule I to the said rules, namely :-

(313) Vijaya Nethralaya Super Speciality Eye Hospital, # 5, 20th Cross, Malgala Underpass, Ring Road, 2nd Stage, Nagarabhavi, Bangalore-560 091..

By Order and in the name of the Governor of Karnataka,

**D. NAGESH PHATAK**

Under Secretary to Government,

Department of Personnel and Administrative Reforms (Service Rules-2).

## ಸಿಬ್ಬಂದಿ ಮತ್ತು ಆಡಳಿತ ಸುಧಾರಣಾ ಸಚಿವಾಲಯ

### ಅಧಿಸೂಚನೆ

### ಸಂಖ್ಯೆ: ಸಿಆಸುಇ 01 ಎಸ್‌ಎಂಆರ್ 2012, ಬೆಂಗಳೂರು, ದಿನಾಂಕ: 2–1–2013.

ಕರ್ನಾಟಕ ಸರ್ಕಾರಿ ನೌಕರರ (ವೈದ್ಯಕೀಯ ಹಾಜರಾತಿ) ನಿಯಮಗಳು 1963 ರ ನಿಯಮ 3 ರ ಖಂಡ (ಎಫ್‌ಎಫ್)ನ ಮೂಲಕ ಪ್ರದತ್ತವಾದ ಅಧಿಕಾರಗಳನ್ನು ಚಲಾಯಿಸಿ, ಕರ್ನಾಟಕ ಸರ್ಕಾರವು ಸದರಿ ನಿಯಮಗಳ ಷೆಡ್ಯೂಲ್–I ರ ಐಟಂ 312 ರ ನಂತರ ಈ ಕೆಳಕಂಡ ಐಟಂನ್ನು ಸೇರ್ಪಡೆಗೊಳಿಸಿದೆ :–

(313) ವಿಜಯ ನೇತ್ರಾಲಯ ಸೂಪರ್ ಸ್ಪೆಷಾಲಿಟಿ ಐ ಹಾಸ್ಪಿಟಲ್, ನಂ. 5, 20ನೇ ಕ್ರಾಸ್, ಮಾಳಗಾಳ ಅಂಡರ್ ಪಾಸ್, ರಿಂಗ್ ರಸ್ತೆ, 2ನೇ ಹಂತ, ನಾಗರಭಾವಿ, ಬೆಂಗಳೂರು–560 091.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ

**ಡಿ. ನಾಗೇಶ್ ಪಾಟಕ್**

ಸರ್ಕಾರದ ಅಧೀನ ಕಾರ್ಯದರ್ಶಿ,

ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಇಲಾಖೆ (ಸೇವಾ ನಿಯಮಗಳು–2).

**P.R. 28**

## ನಗರಾಭಿವೃದ್ಧಿ ಸಚಿವಾಲಯ

### ಅಧಿಸೂಚನೆ

### ಸಂಖ್ಯೆ: ನಅಇ 291 ಬೆಮಪ್ರಾ 2012, ಬೆಂಗಳೂರು, ದಿನಾಂಕ : 28–12–2012.

ಕರ್ನಾಟಕ ನಗರಾಭಿವೃದ್ಧಿ ಪ್ರಾಧಿಕಾರ ಕಾಯ್ದೆ 1987ರ ಕಲಂ 3(3)(ಎ) ಹಾಗೂ (ಎಂ) ಮತ್ತು (4) ರಡಿ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ ಈ ಕೆಳಕಂಡವರನ್ನು ಹಾವೇರಿ ನಗರಾಭಿವೃದ್ಧಿ ಪ್ರಾಧಿಕಾರದ ಅಧ್ಯಕ್ಷರು/ಸದಸ್ಯರನ್ನಾಗಿ ತಕ್ಷಣದಿಂದ ಜಾರಿಗೆ ಬರುವಂತೆ ಸರ್ಕಾರದ ಇಚ್ಛಾನುಸಾರ ಅಥವಾ 3 ವರ್ಷದ ಅವಧಿಯವರೆಗೆ ಇವುಗಳಲ್ಲಿ ಯಾವುದು ಮೊದಲೋ ಅಲ್ಲಿಯವರೆಗೆ ನಾಮನಿರ್ದೇಶನ ಮಾಡಿ ಆದೇಶಿಸಿದೆ.

| ಕ್ರಮ ಸಂಖ್ಯೆ | ಹೆಸರು ಮತ್ತು ವಿಳಾಸ | ವರ್ಗ |
|---|---|---|
| 1. | ಶ್ರೀ ನಾಗೇಂದ್ರ ಪ್ರಭುಗೌಡ ಕಟಕೋಳ, ವಿದ್ಯಾನಗರ ಪಶ್ಚಿಮ ಹಾವೇರಿ | ಅಧ್ಯಕ್ಷರು |
| 2. | ಶ್ರೀ ಜೆ.ಕೆ. ದೇಸಾಯಿ, ರಾಜೇಂದ್ರ ನಗರ, ಹಾವೇರಿ | ಸದಸ್ಯರು |
| 3. | ಶ್ರೀ ಮೆಹಬೂಬ ಅಲಿ ನಾರಂಗಿ, ದಾನೇಶ್ವರಿ ನಗರ, ಹಾವೇರಿ | ಸದಸ್ಯರು |
| 4. | ಶ್ರೀಮತಿ ದೀಪಾ ಎನ್. ಹೇರೂರು, ಶಿವಬಸವ ನಗರ, ಹಾವೇರಿ | ಸದಸ್ಯರು |
| 5. | ಶ್ರೀ ಪ್ರಶಾಂತ ಅಸುಂಡಿ, ನಾಯಕರ ಓಣಿ, ಸೂಲಮಟ್ಟಿ, ಹಾವೇರಿ | ಸದಸ್ಯರು |

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ

**ಟಿ.ಎಂ. ವಾಸುದೇವ ರಾವ್**

ಸರ್ಕಾರದ ಅಧೀನ ಕಾರ್ಯದರ್ಶಿ,

ನಗರಾಭಿವೃದ್ಧಿ ಇಲಾಖೆ.

**P.R. 42**

## ಅರಣ್ಯ ಪರಿಸರ ಮತ್ತು ಜೀವಿಶಾಸ್ತ್ರ ಸಚಿವಾಲಯ

**ಸಂಖ್ಯೆ:ಅಪಜೀ 95 ಎಫ್ಎಎಫ್ 2006 ಬೆಂಗಳೂರು, ದಿನಾಂಕ:05–11–2007**

**ಅಧಿಸೂಚನೆ**

ಕರ್ನಾಟಕ ಅರಣ್ಯ ಕಾಯ್ದೆ 1963 ರ (1964ನೇ ಇಸವಿಯ ಕಾಯ್ದೆ 5) ಕಲಂ –4ರಲ್ಲಿ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ, ಸರ್ಕಾರವು ಈ ಕೆಳಕಂಡ ಅನುಸೂಚಿಯಲ್ಲಿ ನಮೂದಿಸಿರುವ ಬಳ್ಳಾರಿ ಜಿಲ್ಲೆಯ ಹಗರಿ ಬೊಮ್ಮನಹಳ್ಳಿ ತಾಲ್ಲೂಕಿನ ಹೊಸಕೇರಿ ಗ್ರಾಮದ ಸರ್ಕಾರಿ ಜಮೀನುಗಳನ್ನು ಈ ಅಧಿಸೂಚನೆಯು ಗೆಜೆಟಿನಲ್ಲಿ ಪ್ರಕಟಗೊಂಡ ದಿನಾಂಕದಿಂದ ಜಾರಿಗೆ ಬರುವಂತೆ ಮೀಸಲು ಅರಣ್ಯವೆಂದು ಈ ಮೂಲಕ ಘೋಷಿಸಿದೆ.

**" ಅನುಸೂಚಿ"**

| ಗ್ರಾಮದ ಹೆಸರು | ಕ್ಷೇತ್ರದ ಸರ್ವೆ ನಂ | ವಿಸ್ತೀರ್ಣ (ಹೆಕ್ಟೇರ್‌ಗಳಲ್ಲಿ) | ಕ್ಷೇತ್ರದ ಹೆಸರು |
|---|---|---|---|
| ಹೊಸಕೇರಿ | 999 | 12.35 | ಹೊಸಕೇರಿ |
| | 1000 | 86.12 | |
| | 1001, | 176.35 | |
| | 1002 | 42.05 | |
| | 1003 | 32.17 | |
| | | ಒಟ್ಟು **349.04 ಹೆಕ್ಟೇರ್** | |

2.ಮೇಲ್ಕಂಡ ಕಾಯ್ದೆಯ ಕಲಂ 4(1)(ಸಿ) ಪ್ರಕಾರ ಕರ್ನಾಟಕ ಸರ್ಕಾರವು ಅರಣ್ಯ ಕ್ಷೇತ್ರನಿರ್ಧಾರಣಾಧಿಕಾರಿಗಳು, ಬಳ್ಳಾರಿ ಇವರನ್ನು **"ಅರಣ್ಯ ವ್ಯವಸ್ಥಾಪನಾಧಿಕಾರಿ"** ಗಳನ್ನಾಗಿ ನೇಮಿಸಲಾಗಿದೆ. ಅರಣ್ಯ ವ್ಯವಸ್ಥಾಪನಾಧಿಕಾರಿಗಳು ಇವರು ಮೇಲೆ ನಮೂದಿಸಿರುವ ಪ್ರದೇಶದ ಮೇಲೆ ಯಾವುದೇ ವ್ಯಕ್ತಿಗೆ ಇರಬಹುದಾಗಿರುವ ಹಕ್ಕು ಬಾಧ್ಯತೆಗಳನ್ನು ಇತ್ಯರ್ಥಗೊಳಿಸಿ, ನಿರ್ಧರಿಸಿ ವಿಚಾರಣೆ ಮಾಡಿ ತೀರ್ಮಾನಿಸುವುದು.

3.ಮೇಲ್ಕಂಡ ಕಾಯ್ದೆಯ ಕಲಂ 4(2) ಪ್ರಕಾರ ಕರ್ನಾಟಕ ಸರ್ಕಾರವು ಉಪ ಅರಣ್ಯ ಸಂರಕ್ಷಣಾಧಿಕಾರಿಗಳು, ಬಳ್ಳಾರಿ ವಿಭಾಗ, ಬಳ್ಳಾರಿ ಇವರನ್ನು ಈ ವಿಚಾರಣೆಯಲ್ಲಿ ಅರಣ್ಯ ವ್ಯವಸ್ಥಾಪನಾಧಿಕಾರಿಗಳಿಗೆ ಸಹಕರಿಸಲು ಹಾಗೂ ಅರಣ್ಯ ಇಲಾಖೆಯ ಪರವಾಗಿ ಪ್ರತಿನಿಧಿಸಲು ನೇಮಿಸಿದೆ.

4.ಮೇಲ್ಕಂಡ ಅಧಿನಿಯಮ 11, 12, ಮತ್ತು 14 ನೇ ಪ್ರಕರಣಗಳ ಪ್ರಕಾರ ಅರಣ್ಯ ವ್ಯವಸ್ಥಾಪನಾಧಿಕಾರಿಗಳು ಯಾವುದೇ ಆದೇಶ ಹೊರಡಿಸಿದ ದಿನಾಂಕದಿಂದ 3 ತಿಂಗಳೊಳಗಾಗಿ ಬಾದಿತ ವ್ಯಕ್ತಿಗಳು ಸಲ್ಲಿಸಿದ ಮೇಲ್ಮನವಿಗಳನ್ನು ಪರಿಶೀಲಿಸಲು ಸದರಿ ಕಾಯ್ದೆಯ ಕುರಿತು 16 (1)ನೇ ಪ್ರಕಾರ ಕರ್ನಾಟಕ ಕಂದಾಯ ಮೇಲ್ಮನವಿ ನ್ಯಾಯ ಮಂಡಳಿಗೆ ಅಧಿಕಾರವಿರುತ್ತದೆ.

5.ಮೇಲ್ಕಂಡ ಅಧಿನಿಯಮ 15 ನೇ ಪ್ರಕರಣದ ಪ್ರಕಾರ ಬಾಧಿತವಾದ ಯಾವುದೇ ವ್ಯಕ್ತಿಯು ಸದರಿ ಅಧಿನಿಯಮದ ಪ್ರಕರಣ 16(2)ನೇ ಪ್ರಕಾರ ಆದೇಶ ಹೊರಡಿಸಿದ ದಿನಾಂಕದಿಂದ 3 ತಿಂಗಳೊಳಗಾಗಿ ಜಿಲ್ಲಾ ನ್ಯಾಯಾಲಯಕ್ಕೆ ಮೇಲ್ಮನವಿ ಸಲ್ಲಿಸಬಹುದು.

**ಗಡಿ ವಿವರ**

**ಉತ್ತರ:–**

ಸೀಮಾರೇಖೆಯು ಹೊಸಕೇರಿ ಗ್ರಾಮದ ಸರ್ವೆ ನಂ 999ರ ಈಶಾನ್ಯ ದಿಕ್ಕಿನ ಮೂಲೆಯಲ್ಲಿ ಹಾಗೂ ಸದರಿ ಗ್ರಾಮದ ಸರ್ವೆ ನಂ 999ರ 11ನೇ ಗಡಿಗಳ ಮೇಲೆ 1ನೇ ಕಲ್ಲಿನಿಂದ $143^0$ ಡಿಗ್ರಿ ಕೋನದೊಂದಿಗೆ ಆರಂಭವಾಗಿ ಸದರಿ ಗ್ರಾಮದ ಸರ್ವೆ ನಂ 1 ಪಶ್ಚಿಮ ಗಡಿಗುಂಟ ಚಲಿಸುತ್ತಾ ಸದರಿ ಕ್ಷೇತ್ರದ ಮೂಲೆಯಲ್ಲಿರುವ 4ನೇ ಕಲ್ಲನ್ನು ಸೇರುತ್ತದೆ. ಉತ್ತರದಲ್ಲಿ ಸೀಮಾರೇಖೆಯು ಈ ಕೆಳಗಿನಂತೆ ಚಲಿಸುವುದು.

| ಕಲ್ಲಿನಿಂದ | ಕಲ್ಲಿಗೆ ಕೋನ | ಕೋನ | ಅಂತರ ಸರಪಳಿಗಳಲ್ಲಿ |
|---|---|---|---|
| 1 | 2 | $143^0$ | 10.23 |
| 2 | 3 | $142^0$ | 46.65 |
| 3 | 4 | $146^0$ | 6.88 |

**ಪೂರ್ವ:–**

ಸೀಮಾರೇಖೆಯು ಸದರಿ ಕ್ಷೇತ್ರದ ಸರ್ವೆ ನಂ 1000ರ 4ನೇ ಕಲ್ಲಿನಿಂದ ವಾಯುವ್ಯ ದಿಕ್ಕಿನ ಮೂಲೆಯಲ್ಲಿ $150^0$ ಡಿಗ್ರಿ ಕೋನದೊಂದಿಗೆ ಆರಂಭವಾಗಿ ಸದರಿ ಗ್ರಾಮದ ಸರ್ವೆ ನಂ 1ರ ಪಶ್ಚಿಮ ಗಡಿಗುಂಟ ದಕ್ಷಿಣಾಭಿಮುಖವಾಗಿ ಚಲಿಸುತ್ತಾ ಸದರಿ ಕ್ಷೇತ್ರದ ಆಗ್ನೇಯ ದಿಕ್ಕಿನಲ್ಲಿರುವ 8ನೇ ಕಲ್ಲನ್ನು ಸೇರುತ್ತದೆ. ಪೂರ್ವದಲ್ಲಿ ಸೀಮಾರೇಖೆಯು ಈ ಕೆಳಗಿನಂತೆ ಚಲಿಸುವುದು.

| ಕಲ್ಲಿನಿಂದ | ಕಲ್ಲಿಗೆ ಕೋನ | ಕೋನ | ಅಂತರ ಸರಪಳಿಗಳಲ್ಲಿ |
|---|---|---|---|
| 4 | 5 | $150^0$ | 31.10 |
| 5 | 6 | $149^0$ | 13.38 |
| 6 | 7 | $148^0$ | 8.85 |
| 7 | 8 | $145^0$ | 79.03 |

